ಡಾ॥ ಎಚ್.ಆರ್.ರಘುನಾಥ ಭಟ್

# ಡಂಬಳದಲ್ಲಿ ಬೌದ್ಧಾವಶೇಷಗಳ ಶೋಧನೆ

"ಕರ್ನಾಟಕ ಭೂಮಿ ಭಾಮಿನೀ ಮಧ್ಯದೇಶಕ್ಕೆ ವಿಶದ ಮೌಕ್ತಿಕ ಮನೋಹಾರಿ ಹಾರದಂತಿರ್ದ್ದ"[1] ಧರ್ಮವೊಳಲು (ಧರ್ಮಪುರ–ಡಂಬಳ) ಧಾರವಾಡ ಜಿಲ್ಲೆಯ ಮುಂಡರಗಿ ತಾಲ್ಲೂಕಿನಲ್ಲಿದ್ದ ಬೌದ್ಧಮತ ಹಾಗೂ ಬೌದ್ಧವಾಸ್ತು–ಶಿಲ್ಪಕಲೆಗೆ ನೆಲೆಯಾಗಿತ್ತೆಂಬುದು ಸ್ವಾರಸ್ಯಕರ ಸಂಗತಿ. ಕಲ್ಯಾಣ ಚಾಳುಕ್ಯ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನ ಕಾಲದಲ್ಲಿ (೧೦೯೮ ಸಂಗಮ ಸೆಟ್ಟಿ ನಿರ್ಮಿಸಿದ ಬೌದ್ಧವಿಹಾರಕ್ಕೆ ನಂದಾದೀಪಕ್ಕಾಗಿ ಸೊಳಸಿಯ ಪ್ರಮಾಣದ ಸೊಂಟಿಗೆಯ ಗಾಣದಲ್ಲೊಂದು ಸೊಂಟಿಗೆ ಎಣ್ಣೆಯನ್ನು 'ತೆಲ್ಲಿಗರಯ್ವತ್ತೊಕ್ಕಲು' ಕೊಟ್ಟರೆಂಬ ವಿಚಾರವು ಸ್ಥಳೀಯ ಶಾಸನೀಯವಾಗಿ ತಿಳಿದು ಬರುತ್ತದೆ.[2]

ಲೊಕ್ಕಿಗುಂಡಿಯ ವಡ್ಡವ್ಯವಹಾರಿ ಸಂಗಮಯ್ಯ ಸೆಟ್ಟಿ ಕಟ್ಟಿಸಿದ ಈ ತಾರಾದೇವಿವಿಹಾರ ಎಲ್ಲಿದೆ? ಅದರ ಸ್ಥಳ ನಿರ್ದೇಶನ ಈಗ ಸಾಧ್ಯವೆ? ಅದಕ್ಕೆ ಸಂಬಂಧಿಸಿದ ಬೌದ್ಧಾವಶೇಷಗಳೇನೇನೂ ಉಳಿದಿಲ್ಲವೆ? ಇದ್ದರೆ ಎಲ್ಲಿವೆ? – ಇವೇ ಮುಂತಾದ ಪ್ರಶ್ನೆಗಳನ್ನು ತಲೆಯಲ್ಲಿ ತುಂಬಿಕೊಂಡು ಕ್ಷೇತ್ರಕಾರ್ಯಕ್ಕಾಗಿ ಡಂಬಳಕ್ಕೆ ಇತ್ತೀಚೆಗೆ ನಾವು ಹೋದೆವು. ಡಂಬಳ ಹಾಗೂ ಅದರ ಪರಿಸರದಲ್ಲಿ ವ್ಯಾಪಕವಾಗಿ ಸರ್ವೇಕ್ಷಣೆ ನಡೆಸಿದವು. ಆರ್ಯತಾರಾಭಗವತೀ(?) ಶಿಲ್ಪವನ್ನೊಳಗೊಂಡ ಬೌದ್ಧ ಬಿಕ್ಷುವಿನ ಉಬ್ಬು ಶಿಲ್ಪ ಫಲಕ ಹಾಗೂ ಬೌದ್ಧವಿಹಾರದ ಬಾಗಿಲುವಾಡಕ್ಕೆ ಸಂಬಂಧಿಸಿದ ಬೌದ್ಧಯಕ್ಷ ಶಿಲ್ಪವನ್ನೊಳಗೊಂಡ ಇನ್ನೊಂದು ಫಲಕ ಪತ್ತೆಯಾದವು. ಹೀಗೆ ಶೋಧಿತ ಶಿಲ್ಪಕಲಾಕೃತಿ ಹಾಗೂ ಅದರ ಮಹತ್ವ – ಇಷ್ಟಕ್ಕೇ ಸೀಮಿತವಾಗಿದೆ – ಈ ಪುಟ್ಟಪ್ರಬಂಧ; ಇವುಗಳ ವಿಶ್ಲೇಷಣೆಯೊಂದನ್ನು ಮೊದಲ ಬಾರಿಗೆ ಇಲ್ಲಿ ನೀಡಲು ಪ್ರಯತ್ನಿಸಲಾಗಿದೆ.

ಸುಮಾರು ನೂರುವರ್ಷಗಳ ಹಿಂದೆ (ಜುಲೈ 1881) ಜಾನ್ ಫೇತ್‌ಫುಲ್ ಫ್ಲೀಟರು ಸಂಪಾದಿಸಿ, ಪ್ರಾಮಾಣಿಕವಾಗಿ ಪ್ರಕಟಿಸಿದ ನಲವತ್ತೇಳು ಸಾಲಿನ ಶಾಸನವಿದ್ದ ಸ್ಥಳ "ಜೈನ ಬಸದಿ" ಯೆಂದು ಬರೆದಿದ್ದಲ್ಲದೆ ಆ ಶಾಸನವು 'ಜಿನಶಾಸನ' ಎಂದೂ ಬರೆದಿದ್ದರು.[3] ಜೇಮ್ಸ್ ಬರ್ಜೆಸ್ ಆ ಶಾಸನವನ್ನು ಮರುಪರಿಶೀಲಿಸಿ ಅದು ಬೌದ್ಧಶಾಸನವೆಂದಿದ್ದರು.[4] ಅಲ್ಲಿಂದ ಇಲ್ಲಿಯವರೆಗೂ ಕರ್ನಾಟಕದಲ್ಲಿ ಬೌದ್ಧಧರ್ಮವನ್ನು ಕುರಿತಂತೆ ಬರೆಯುವಾಗೆಲ್ಲ ಈ ಶಾಸನವನ್ನು ನಾವು ಉಲ್ಲೇಖಿಸುತ್ತ ಬಂದಿದ್ದೇವೆ. ಈಚೆಗೆ ತಾಳ್ತಜೆ ವಸಂತಕುಮಾರರು ತಮ್ಮ ಪಿ.ಎಚ್.ಡಿ. ಪ್ರಬಂಧದಲ್ಲಿ 'ಕರ್ನಾಟಕದಲ್ಲಿ ಬೌದ್ಧಸಂಸ್ಕೃತಿಯ' ವಿವರಗಳನ್ನು ಸಮಗ್ರವಾಗಿ ನೀಡಿದ್ದಾರೆ. ಆದರೆ ಇಲ್ಲೂ ಶಾನವಿದ್ದ ಸ್ಥಳ ಜೈನಬಸದಿಯೆಂದೂ, ಇನ್ನೊಂದು ಬೌದ್ಧ ಶಾಸನವೂ ಜೈನಬಸದಿಯ ಬಾಗಿಲುವಾಡದ ಎಡಬದಿಗಿದೆಯೆಂದೂ ನಮೂದಿಸಲಾಗಿದೆ[5]. ಎಂ.ಎಂ. ಕಲಬುರ್ಗಿಯವರು ಸಂಪಾದಿಸಿದ ಧಾರವಾಡ ಜಿಲ್ಲಾ ಶಾಸನ ಸೂಚಿಯಲ್ಲೂ ಇದೇ ರೀತಿಯಲ್ಲಿ ಬರೆಯಲಾಗಿದೆ.[6] ಈ ಹಿನ್ನೆಲೆಯಲ್ಲಿ ನಮ್ಮ ಜಿಜ್ಞಾಸೆ ಆರಂಭವಾಯಿತು. ನಮ್ಮ ವಿದ್ಯಾರ್ಥಿ–ಮಿತ್ರರಾದ ದ್ಯಾಮನಗೌಡ ಹಾಗೂ ಬೆಳೇರಿಯವರನ್ನೊಳಗೊಂಡು ವ್ಯಾಪಕವಾದ ಕ್ಷೇತ್ರ ಕಾರ್ಯವನ್ನು ಮಾಡಿದೆವು. ಮೊದಲು ಪ್ರಕಟಿತ ಶಾಸನ ಶಿಲೆ ಸಿಗಲಿಲ್ಲ, ಜೈನಬಸದಿಯೂ ಗೋಚರಿಸಲಿಲ್ಲ. ಕೊನೆಗೆ ಊರ ಹೊರ ಭಾಗದ ದಿಬ್ಬದ ಮೇಲಿದ್ದ ಭಗ್ನಮಂದಿರದ ಬಾಗಿಲುವಾಡದ ಅಗಲ ಶಿಲೆಯ ಮೇಲಿದ್ದ ಶಾಸನ ಪಾಠವನ್ನು ಅಚ್ಚುಮಾಡಿಕೊಂಡೆವು. ಆದರೆ ಈ ಶಾಸನೋಲ್ಲಿಖಿತ ತಾರಾಭಗವತೀ, ಬೌದ್ಧವಿಹಾರಗಳೆಲ್ಲಿ? – ಅವುಗಳ ಭಗ್ನಾವಶೇಷಗಳಾದರೂ ಸಿಗಬೇಕಲ್ಲವೆ? ಅವೆಲ್ಲ ಏನಾದವು? ಆ ಪ್ರದೇಶದಲ್ಲೆಲ್ಲ ಪರಿಶೋಧಿಸಿದೆವು. ಪ್ರಸ್ತುತ ಶಾಸನವಿರುವ ಭಗ್ನಮಂದಿರವ ಹಿಂಭಾಗದಲ್ಲಿ ಭೂಗತವಾಗಿದ್ದ ಶಿಲ್ಪಫಲಕಗಳನ್ನು ಹುಡುಕಿ ತೆಗೆದೆವು.

ಈ ಶಿಲ್ಪಫಲಕಗಳಲ್ಲಿ ಒಂದು – ಬೌದ್ಧ ಮತ್ತು ತಾರಾಭಗವತಿ ಮೂರ್ತಿಶಿಲ್ಪಗಳನ್ನೊಳಗೊಂಡಿವೆ. ಇನ್ನೊಂದು ಬಾಗಿಲುವಾಡ ಫಲಕದ ಚೌರಿನಲ್ಲಿ ವಿಶಿಷ್ಟ ರೀತಿಯ ಬಾಗಿಲು ಶಾಖೆ ಹಾಗೂ ಯೋಗಪಟ್ಟವುಳ್ಳ ಬೋಧಿಸತ್ವ ಯಕ್ಷನ (ಜಂಬಾಲ!) ಶಿಲ್ಪವಿರುವುದು ಪತ್ತೆಯಾಯಿತು. ಇವೆರಡನ್ನೂ ಈಗಾಗಲೇ ಪತ್ತೆಯಾದ ಶಾಸನ ಪಾಠದ ವಿವರಣೆಯು ಹಿನ್ನೆಲೆ

ಯಲ್ಲಿ ವ್ಯಾಸಂಗಮಾಡಲು ಆರಂಭಿಸಿದೆವು. ಈ ಶಿಲ್ಪ ಫಲಕಗಳು ಹಾಗೂ ಶಾಸನವಿರುವ ದಿಬ್ಬದ ಭಗ್ನಮಂದಿರ ಮೂಲತಃ ಬೌದ್ಧ ತಾರಾಭಗವತೀ ವಿಹಾರವಾಗಿದ್ದಿರಬಹುದು ಎಂಬುದನ್ನು ಹೆಚ್ಚು ಖಚಿತವಾಗಿ ಹೇಳಲು ಸಾಧ್ಯವಾಗುತ್ತದೆ.

ಕಲ್ಯಾಣ ಚಾಳುಕ್ಯ ಆರ್ಮಡಿ ವಿಕ್ರಮಾದಿತ್ಯನ ಕಾಲದಲ್ಲಿ ಆತನ ಹಿರಿಯರಸಿ ಲಕ್ಷ್ಮೀದೇವಿಯು ಧಮ್ಮಪುರ ಪ್ರಧೇಶವನ್ನಾಳುತ್ತಿದ್ದಾಗ ಧರ್ಮವೊಳಲಿನ ಹದಿನಾರು ಜನ ಸೆಟ್ಟಿಗಳು ಸೇರಿ ಬೌದ್ಧವಿಹಾರ ಕಟ್ಟಿಸಿ ದಾನದತ್ತಿ ನೀಡಿದರು (೧೦೯೫). ಅದಕ್ಕಿಂತ ಹೆಚ್ಚಿನ ರೀತಿಯಲ್ಲಿ ಲಕ್ಕುಂಡಿಯ ವಡ್ಡವ್ಯವಹಾರಿ ಸಂಘವಯ್ಯ ಸೆಟ್ಟಿ ತಾರಾಭಗವತೀ ವಿಹಾರವನ್ನು ದೊಡ್ಡಪ್ರಮಾಣದಲ್ಲಿ ನಿರ್ಮಿಸಿದ (೧೦೯೮). ಶ್ರೀ ತಾರಾಭಗವತಿಯನ್ನು ಈ ಸೆಟ್ಟರು ವಿಶೇಷವಾಗಿ ಸ್ತುತಿಸಿದ್ದಾರೆ. ಇವನ್ನೆಲ್ಲ ದಾಖಲಿಸುವ ಶಾಸದನ ಶಿರೋಫಲಕದ ಮೇಲೆ (Head-piece) ತಾರಾಭಗವತೀ ಶಿಲ್ಪವನ್ನು ಕೆತ್ತಿಸಿದ್ದಾರೆ. "ನಮೋ ಬುದ್ಧಾಯ, ಭಗವತೀ ತಾರಾ ನಮಸ್ತುಭ್ಯಂ" ಎಂದು ಆರಂಭವಾಗುವ ಬೌದ್ಧಧರ್ಮೀಯ ದೀರ್ಘ ಶಾಸನದ ಪಾಠದಲ್ಲಿ ಸೇರಿರುವ ಅಷ್ಟೇ ಬೃಹತ್ತಾಗಿದ್ದಿರಬಹುದಾದ ತಾರಾಭಗವತೀ ವಿಹಾರ ಹಾಗೂ ಅದನ್ನು ಖಚಿತಪಡಿಸುವ, ಈಗ ಪತ್ತೆಯಾಗಿರುವ ಸುಂದರ ಶಿಲಾಶಿಲ್ಪಗಳನ್ನು ವಿಶ್ಲೇಷಣೆ ಮಾಡಿದಾಗ ನಮಗೆ ಗೊತ್ತಾಗುವ ಸಾಂಸ್ಕೃತಿಕ ಕಲಾ ಮಹತ್ವವನ್ನು ಹೀಗೆ ಸಂಗ್ರಹಿಸಬಹುದು:

(೧) ಇದೀಗ ಪತ್ತೆಯಾದ ಶಿಲ್ಪಾವಶೇಷಗಳು ಮಧ್ಯಕಾಲೀನ ಕರ್ನಾಟಕದ ಕಲ್ಯಾಣ ಚಾಳುಕ್ಯ ಶೈಲಿಯ ಬೌದ್ಧ ಶಿಲ್ಪಕಲೆಗೆ ಮತ್ತೆರಡು ಸೇರ್ಪಡೆಗಳಾಗಿ ಮಹತ್ವ ಪಡೆಯುತ್ತವೆ.

(೨) ಮಧ್ಯಕಾಲೀನ ಕರ್ನಾಟಕದಲ್ಲಿ ಇತರ ಧರ್ಮಗಳು ತೀರಕಡೆಗಣಿಸ ಬಹುದಾಗಿದ್ದ ಧರ್ಮವಾಗಿರದೆ 'ನಾನೂ ಇದ್ದೇನೆ' ಎಂದು ಕೈಯೆತ್ತಿ ತೋರಿಸಿಕೊಳ್ಳುವಷ್ಟರ ಮಟ್ಟಿಗಾದರೂ ಪ್ರಬಲವಾಗಿತ್ತು – ಈ ಬೌದ್ಧಧರ್ಮ.

(೩) ಈ ಕಾಲಘಟ್ಟದಲ್ಲಿ ಬುದ್ಧನಿಗಿಂತ ತಾರಾಭಗವತೀ ಹೆಚ್ಚಿನ ಪ್ರಾಧಾನ್ಯ ಪಡೆದಳು. ಬಳ್ಳಿಗಾವೆ – ಬನವಾಸಿ – ಡಂಬಳ – ಕೋಳಿವಾಡಗಳಲ್ಲಿದ್ದ ತಾರಾಭಗವತೀ ವಿಹಾರ, ಭಗವತೀ ಆರಾಧನೆ, ಆ ಸಂಬಂಧದ ದಾನ ದತ್ತಿ ವಿವರಗಳು ಸ್ವಾರಸ್ಯಕರವಾಗಿವೆ.

ಮೂಲದಲ್ಲಿ ಯಜ್ಞಯಾಗಾದಿ ವಿವರಗಳಿಂದ ತುಂಬಿದ ವೈದಿಕ ಆರಾಧನೆಗೆ ಪ್ರತಿಕ್ರಿಯೆಯಾಗಿ ಮೂಡಿಬಂದ ಸರಳ ಬೌದ್ಧಮತವು ಬರಬರುತ್ತ ಶಾಖೋಪಶಾಖೆಯಾಗಿ, ತಾಂತ್ರಿಕ ಆರಾಧನಾ ಸ್ವರೂಪ ಪಡೆದದ್ದು ಒಂದೆಡೆಯಾದರೆ, ವಜ್ರಯಾನದಂತಹ ತಾಂತ್ರಿಕ ವಿಧಾನ, ತಾರಾಭಗವತಿಯ ಆರಾಧನೆ – ಉತ್ಸವ ಹೆಚ್ಚು ಜನಪ್ರಿಯವಾದದ್ದು ಇನ್ನೊಂದೆಡೆ.

ತಾರೆ ಜಗತ್ತಿನ ರಕ್ಷಕಳು. ದುರ್ಬಲರಿಗೆ ಶಕ್ತಿದಾಯಕಳು. ತಾರಾಮಂತ್ರ ಪಠಣದಿಂದ ಪಾಪ ಕಷ್ಟ ಪರಿಹಾರವಾಗುವುದು. ಜನಸಾಮಾನ್ಯರ ಕಷ್ಟ ನಿವಾರಣೆಗಾಗಿ ಇವಳ ಆರಾಧನೆ ಅಗತ್ಯ ಎಂಬ ಭಾವನೆ ಹೆಚ್ಚಿತ್ತು. ಸಾಲದ್ದಕ್ಕೆ ಹಾವು, ಬೆಂಕಿ, ಭೂತ ಪಿಶಾಚಿಗಳನ್ನು ಮಂತ್ರ ತಂತ್ರಾದಿಗಳಿಂದ ನಿವಾರಿಸಬೇಕು. ಇದಕ್ಕೆ ತಾಂತ್ರಿಕ ವಿಧಾನ ಒಂದು ಮಾಧ್ಯಮ – ಈ ಧರ್ಮ ಪ್ರಸಾರವು ಜನರ ವಿಶ್ವಾಸಗಳಿಕೆಗೆ ಜನಾಚರಣೆಯಲ್ಲಿ ಆಗಲೇ ಇದ್ದ ನಂಬಿಕೆಗಳನ್ನು ಜಾನಪದ ಸತ್ವಪೂರ್ಣವಾಗಿ, ಜನಪ್ರಿಯವಾಗಿ ಆರಾಧಿಸುವುದು ಅಂದಿನ ಅಗತ್ಯವಷ್ಟೇ ಅಲ್ಲ ಅನಿವಾರ್ಯವಾಯಿತೇನೋ.

ಒಟ್ಟಿನಲ್ಲಿ ಆಧ್ಯಾತ್ಮಿಕ ಸಾಧನೆಮಾಡಿ ಕೇವಲ ಜ್ಞಾನಪಡೆದವ್ಯಕ್ತಿಗಿಂತ ಲೌಕಿಕ ಕಷ್ಟನಿವಾರಕ ತಾರಾಭಗವತಿಯಂಥ ಸ್ತ್ರೀ ಶಕ್ತಿದೇವಿಯಾರಾಧನೆ ಹೆಚ್ಚು ಪ್ರಾಮುಖ್ಯತೆಯನ್ನು ಪಡೆಯಿತು. ಈ ಪ್ರಕ್ರಿಯೆ ಜೈನ ಯಕ್ಷಿಯಾರಾಧನೆಯಲ್ಲೂ, ಹಿಂದೂಮತದ ದುರ್ಗೆ –ಕಾಳಿಯಂಥ ದೇವಿಯಾರಾಧಾನೆಯಲ್ಲೂ ಗಮನಿಸುವಂತೆ, ಬೌದ್ಧ ತಾರಾಭಗವತೀ ಆರಾಧನೆಯಲ್ಲಿ ತಪ್ಪದೇ ಗಮನಿಸಬೇಕು. ಬೌದ್ಧ ಶಾಸನಗಳ ದಾನಭಾಗದಲ್ಲಿರುವ ವಿವರಗಳಿಂದ ಇವು ರುಜುವಾತಾಗುತ್ತದೆ. ಸಂಘಮಯ್ಯ ವ್ಯಕ್ತಿನಾಮದಲ್ಲಿರುವ ಸಂಘವೂ ಬೌದ್ಧಮತದ ಹಿನ್ನೆಲೆಯಲ್ಲಿ ಅರ್ಥಪೂರ್ಣವಾಗಿದೆ. ಇನ್ನೂ ಹೆಚ್ಚಿನ, ವ್ಯಾಪಕವಾದ ಕ್ಷೇತ್ರಕಾರ್ಯಮಾಡಿದಲ್ಲಿ ಡಂಬಳದ ಬೌದ್ಧ ಸಾಂಸ್ಕೃತಿಕ ಕಲಾಮಹತ್ವವನ್ನು ಇನ್ನೂ ಸ್ಪಷ್ಟವಾಗಿ ರೇಖಿಸಬಹುದಾಗಿದೆ.

## ಅಡಿಟಿಪ್ಪಣಿಗಳು :

1 ಇಂಆ X ಪು 185
2. ಅದೇ
3. ಅದೇ
4. ಇಂಆ X ಪು 273
5. ತಾಳ್ತಜೆ ವಸಂತಕುಮಾರ "ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ" ಬೆಂಗಳೂರು 1988. ಪು3,4,89,92,111,116,118,131,164.
6. ಕಲುಬುರ್ಗಿ ಎಂ.ಎಂ. (ಸಂ) "ಧಾರವಾಡ ಜಿಲ್ಲಾ ಶಾಸನಸೂಚಿ" ಧಾರವಾಡ, 1975.
7. ನಮ್ಮ ಕ್ಷೇತ್ರಕಾರ್ಯದಲ್ಲಿ ಸಹಕರಿಸಿದ ಡಂಬಳದ ನಾಗರಿಕರಿಗೆ ಹಾಗೂ ವಸತಿ–ಊಟದ ವ್ಯವಸ್ಥೆ ಮಾಡಿ ಪ್ರೋತ್ಸಾಹಿಸಿದ ಡಂಬಳದ ವೀರಶೈವ ಮಠಾಧಿಪತಿಗಳಿಗೆ ನಮ್ಮ ಹೃತ್ಪೂರ್ವಕ ಕೃತಜ್ಞತೆಗಳು.